

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 177 |
| ಸದಸ್ಯರ ಹೆಸರು | ಶ್ರೀ ಕೆ. ಎ. ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | 14.12.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ, ಹಿರಿಯ ನಾಗರಿಕರ ಸಬಲೀಕರಣ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ವಾರ್ಷಿಕ ಮರಳು ಬೇಡಿಕೆ ಎಷ್ಟು; ಮತ್ತು ಈ ಬೇಡಿಕೆಯನ್ನು ಯಾವ ಯಾವ ಮೂಲಗಳಿಂದ ಪೂರೈಸಲಾಗುತ್ತಿದೆ; (ಸಂಪೂರ್ಣ ಮಾಹಿತಿ ನೀಡುವುದು). | ರಾಜ್ಯಕ್ಕೆ ವಾರ್ಷಿಕ ಅಂದಾಜು 45 ದಶಲಕ್ಷ ಮೆಟ್ರಿಕ್ ಟನ್ ಮರಳಿನ ಬೇಡಿಕೆ ಇರುತ್ತದೆ. ಮರಳಿನ ಬೇಡಿಕೆಯನ್ನು ಈ ಕೆಳಕಂಡ ಮೂಲಗಳಿಂದ ಪೂರೈಸಲಾಗುತ್ತಿರುತ್ತದೆ.<br>1. ಪ್ರಸ್ತುತ, ರಾಜ್ಯದಲ್ಲಿ 289 ಎಂ-ಸ್ಯಾಂಡ್ ಘಟಕಗಳು ಕಾರ್ಯನಿರ್ವಹಿಸುತ್ತಿದ್ದು, ಈ ಘಟಕಗಳಿಂದ ಉತ್ಪಾದಿತ ಮರಳು ಪೂರೈಕೆಯಾಗುತ್ತಿರುತ್ತದೆ.<br>2. ನದಿ ಪಾತ್ರಗಳಲ್ಲಿ ಟೆಂಡರ್ ಕಂ-ಹರಾಜು ಮೂಲಕ ಗುತ್ತಿಗೆ ಮಂಜೂರಾದ 251 ಮರಳು ಗುತ್ತಿಗೆ ಪ್ರದೇಶಗಳಿಂದ ಮರಳು ಪೂರೈಕೆಯಾಗುತ್ತಿರುತ್ತದೆ.<br>3. ಪಟ್ಟಾ ಜಮೀನುಗಳಲ್ಲಿ ಮಂಜೂರು ಮಾಡಲಾಗಿರುವ 95 ಮರಳು ಲೈಸನ್ಸ್ ಪ್ರದೇಶಗಳಿಂದ ಮರಳು ಪೂರೈಕೆಯಾಗುತ್ತಿರುತ್ತದೆ.<br>4. ಕರಾವಳಿ ಜಿಲ್ಲೆಗಳ, ಕರಾವಳಿ ನಿಯಂತ್ರಣ ವಲಯದ (CRZ) ನದಿ ಪಾತ್ರಗಳಲ್ಲಿನ ಮರಳು ದಿಬ್ಬಗಳಿಂದ ಮರಳನ್ನು ತೆರವುಗೊಳಿಸಿ ಪೂರೈಸಲಾಗುತ್ತಿದೆ.<br>5. ಸರ್ಕಾರಿ ಕಾಮಗಾರಿಗಳಿಗೆ ನದಿ ಪಾತ್ರಗಳಲ್ಲಿ ಮೀಸಲಿರಿಸಿರುವ ಮರಳು ಬ್ಲಾಕ್ ಗಳಿಂದ ಮರಳು ಪೂರೈಕೆಯಾಗುತ್ತಿರುತ್ತದೆ.<br>6. ಅಲ್ಲದೇ ನೆರೆ ರಾಜ್ಯಗಳಿಂದ ಎಂ-ಸ್ಯಾಂಡ್ ಮತ್ತು ನದಿ ಮರಳು ಪೂರೈಕೆಯಾಗುತ್ತಿರುತ್ತದೆ.<br>ಮೇಲ್ಕಂಡ ಎಲ್ಲಾ ಮೂಲಗಳಿಂದ ರಾಜ್ಯದ ಸಾರ್ವಜನಿಕರಿಗೆ ಹಾಗೂ ಸರ್ಕಾರಿ ಕಾಮಗಾರಿಗಳಿಗೆ ಮರಳು ಪೂರೈಕೆಯಾಗುತ್ತಿರುತ್ತದೆ. |
| ಆ) | ಕಳೆದ ಒಂದು ದಶಕದಲ್ಲಿ ಮೂರು ಬಾರಿ ಮರಳು ನೀತಿಯನ್ನು ಸರ್ಕಾರವು ಜಾರಿಗೆ ತಂದಿದ್ದರೂ ಜನರಿಗೆ ಕೈಗೆಟಕುವ ದರದಲ್ಲಿ ಮರಳು ಸುಲಭವಾಗಿ ಸಿಗುತ್ತಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುತ್ತದೆ. |